## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 148(73) |
| ಸದಸ್ಯರ ಹೆಸರು: | ಶ್ರೀ ಕೆ.ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ: | 03.03.2020 |
| ಉತ್ತರಿಸುವವರು: | ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಂತರ್ಜಲ ಮಟ್ಟ ಪಾತಾಳಕ್ಕೆ ಕುಸಿದಿರುವುದು ಹಾಗೂ ವರ್ಷದಿಂದ ವರ್ಷಕ್ಕೆ ವಿರಳವಾಗುತ್ತಿರುವ ಮಳೆಗಾಲ ಅಂತರ್ಜಲಕ್ಕೆ ಹೊಡೆತ ನೀಡುತ್ತಿರುವುದು ಹಾಗೂ ನಗರಗಳಲ್ಲಿನ ಡಾಂಬರೀಕರಣದಿಂದಾಗಿ ನೀರು ಇಂಗಲು ಜಾಗವೇ ಇಲ್ಲದೆ ಮಳೆ ನೀರು ಚರಂಡಿಗೆ ಸೇರಿ ವ್ಯರ್ಥವಾಗುತ್ತಿರುವುದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ; ಹಾಗಿದ್ದಲ್ಲಿ, ಕೈಗೊಂಡ ಕ್ರಮಗಳ ಬಗ್ಗೆ ಮಾಹಿತಿ ಒದಗಿಸುವುದು: | ಮಳೆ ನೀರು ವ್ಯರ್ಥವಾಗುತ್ತಿರುವುದನ್ನು ಸರ್ಕಾರ ಪರಿಗಣಿಸಿ ಕರ್ನಾಟಕ ಮಾದರಿ ಕಟ್ಟಡ ಸಂಹಿತೆ – 2017ನ್ನು ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಅಳವಡಿಸಿಕೊಳ್ಳುವಂತೆ ಆದೇಶ ನೀಡಲಾಗಿದೆ.<br><br>ಕರ್ನಾಟಕ ಮಾದರಿ ಕಟ್ಟಡ ಸಂಹಿತೆ – 2017 ರ ಚಾಪ್ಟರ್–10, ಸೆಕ್ಷನ್ 10.1 ರಂತೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ, 100 ಚ.ಮೀ. ಅಥವಾ ಅದಕ್ಕಿಂತ ಹೆಚ್ಚು ವಿಸ್ತೀರ್ಣವಿರುವ ಕಟ್ಟಡಗಳಲ್ಲಿ ಮಳೆನೀರು ಕೊಯ್ಲು ಕಡ್ಡಾಯ ಮಾಡಲಾಗಿದೆ. ಕಟ್ಟಡ ಪರವಾನಗಿ ಪಡೆಯಲು, ಮಳೆನೀರು ಕೊಯ್ಲು ವ್ಯವಸ್ಥೆ ಅಳವಡಿಸುವುದು ಕಡ್ಡಾಯವಾಗಿದೆ. ಆದ್ದರಿಂದ ಮಳೆ ನೀರು ವ್ಯರ್ಥವಾಗದೇ, ಮಳೆನೀರು ಸಂಗ್ರಹ, ನೀರಿನ ಮರುಬಳಕೆ ಹಾಗೂ ಮಳೆ ನೀರು ಸಂರಕ್ಷಣೆಯನ್ನು ಉತ್ತೇಜಿಸಲಾಗುತ್ತಿದೆ. |
| ಆ) | ಭೂಮಿಯಲ್ಲಿ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಅಂತರ್ಜಲ ಪ್ರಮಾಣವನ್ನು ಪರಿಣಾಮಕಾರಿಯಾಗಿ ಹೆಚ್ಚಿಸಲು ಸರ್ಕಾರ ಯಾವ ಮಾರ್ಗೋಪಾಯಗಳನ್ನು ಅನುಸರಿಸುತ್ತಿದೆ: ಹಾಗೂ ಈ ನಿಟ್ಟಿನಲ್ಲಿ ಒದಗಿಸಲಾದ ಹಾಗು ವಿನಿಯೋಗಿಸಲಾದ ಅನುದಾನ ಎಷ್ಟು: (ವಿವರಗಳನ್ನು ನೀಡುವುದು) | ಸೆಕ್ಷನ್ 10.4 ರಂತೆ, 500 ಚ.ಮೀ. ಅಥವಾ ಅದಕ್ಕಿಂತ ಹೆಚ್ಚು ವಿಸ್ತೀರ್ಣವಿರುವ ಸಾರ್ವಜನಿಕ ಉದ್ಯಾನವನಗಳು, ಸ್ಮಾರಕಗಳು, ಆಟದ ಮೈದಾನಗಳು, ಕ್ರೀಡಾಂಗಣ, ಪ್ಲಾಜಾ, ಪಾರ್ಕಿಂಗ್ ಸ್ಥಳಗಳಂತಹ, ಬಯಲು ಪ್ರದೇಶಗಳಲ್ಲಿ ವೈಜ್ಞಾನಿಕವಾಗಿ ಮಳೆನೀರು ಕೊಯ್ಲು ವ್ಯವಸ್ಥೆಯನ್ನು ಅಳವಡಿಸುವುದು ಕಡ್ಡಾಯವಾಗಿದೆ.<br><br>ಹಾಗೂ ಈ ಕೆಳಕಂಡ ತಂತ್ರಜ್ಞಾನಗಳನ್ನು ಉಪಯೋಗಿಸುವ ಆಯ್ಕೆಗಳನ್ನು ಉಲ್ಲೇಖಿಸಲಾಗಿದೆ.<br>1) ವೆಲ್ಕಂ ಚಾನೆಲ್ ಮತ್ತು ಪರ್ಕೋಲೇಷನ್ ಗುಂಡಿಗಳನ್ನು ಅಳವಡಿಸುವುದು.<br>2) ಖಾಲಿಯಿರುವ ಬೋರ್‌ವೆಲ್‌ಗಳನ್ನು ಅಂತರ್ಜಲ ಪುನರ್ ಭರ್ತಿಗಾಗಿ ಬಳಸುವುದು.<br>3) ದೊಡ್ಡ ಜಾಗಗಳಲ್ಲಿ ಹರಿದು ಬಂದು ಸೇರುವ ಮಳೆನೀರನ್ನು ಜಲ–ಸಂಗ್ರಹಾಗಾರಗಳಾಗಿ ಪರಿವರ್ತಿಸುವುದು. |

| | | |
|---|---|---|
| | | ನಗರ ಸ್ಥಳೀಯ ಸಂಸ್ಥೆಗಳ ಅಧೀನದಲ್ಲಿರುವ ಕಟ್ಟಡಗಳಲ್ಲಿ ಮಳೆನೀರು ಕೊಯ್ಲು ವ್ಯವಸ್ಥೆಯನ್ನು ಹಾಗೂ ಮಳೆನೀರು ಚರಂಡಿಗಳಲ್ಲಿ ಅಂತರ್ಜಲ ಪುನರ್‌ಭರ್ತಿ ವ್ಯವಸ್ಥೆಯನ್ನು ಕಲ್ಪಿಸಲು 14ನೇ ಹಣಕಾಸು, ಮುನಿಸಿಪಾಲ್ ನಿಧಿಯಿಂದ ಹಾಗೂ ಎಸ್.ಎಫ್.ಸಿ. ಮುಕ್ತನಿಧಿಯಿಂದ ಬಂದ ಅನುದಾನವನ್ನು ಉಪಯೋಗಿಸುವ ಅವಕಾಶವಿದೆ. |
| ಇ) | ಇತರೆ ದೇಶ ರಾಜ್ಯಗಳಲ್ಲಿ ಅಂತರ್ಜಲ ಪ್ರಮಾಣವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಕೈಗೊಂಡಿರಬಹುದಾದ ವಿಶೇಷ ಯೋಜನೆಗಳನ್ನು ಸರ್ಕಾರವು ಅನುಸರಿಸುವುದೇ: ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಕೈಗೊಂಡಿರುವ ಕ್ರಮಗಳ ಬಗ್ಗೆ ಸಂಪೂರ್ಣ ಮಾಹಿತಿ ಒದಗಿಸುವುದು? | ಕೇಂದ್ರ ಸರ್ಕಾರದ ಉಪಕ್ರಮಗಳಲ್ಲೊಂದಾದ ಜಲಶಕ್ತಿ ಅಭಿಯಾನದಡಿ 56 ನಗರ ಸ್ಥಳಿಯ ಸಂಸ್ಥೆಗಳಲ್ಲಿ ಜಲ ಸಂರಕ್ಷಣೆಯ 4 ಸಂಭಾವ್ಯ ಅಂಶಗಳಾದ ಮಳೆನೀರು ಕೊಯ್ಲು, ಸಂಸ್ಕರಿಸಿದ ತ್ಯಾಜ್ಯ ನೀರಿನ ಮರುಬಳಕೆ, ನೀರಿನ ಮೂಲಗಳ ಪುನಶ್ಚೇತನ ಹಾಗೂ ಗಿಡನೆಡುವ ಕಾರ್ಯಕ್ರಮಗಳ ಮೂಲಕ ಭೂಮಿಯ ಮೇಲಿನ ಜಲಮೂಲಗಳ ಹಾಗೂ ಅಂತರ್ಜಲದ ಸಂರಕ್ಷಣೆಯನ್ನು ಮಾಡಲು ದೇಶೀಯವಾಗಿ ತಂತ್ರಜ್ಞಾನ ಬಳಸಲು ಕ್ರಮಕೈಗೊಳ್ಳಲಾಗಿದೆ. |

**ನಅಇ 09 ಜಿಇಎಲ್ 2020**

(ನಾರಾಯಣ ಗೌಡ)

ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು